WPP-47

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಆಗಸ್ಟ್ ೧೬, ೨೦೧೨ (ಶ್ರಾವಣ ೨೫, ಶಕ ವರ್ಷ ೧೯೩೪) | ಸಂಚಿಕೆ ೩೩ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 32 ಎಲ್‌ಜಿಜಿ 2011, ಬೆಂಗಳೂರು, ದಿನಾಂಕ: 19ನೇ ಜುಲೈ, 2012.**

ಈ ಹಿಂದೆ ಇದೇ ಸಮ ಸಂಖ್ಯೆಯ ದಿನಾಂಕ : 10–11–2011ರ ಅಧಿಸೂಚನೆ ಮುಖಾಂತರ ಮಾಡಲಾದ ನಾಮ ನಿರ್ದೇಶನ ರದ್ದುಗೊಳಿಸಿ ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ ಉಪ ಕಲಂ (1) ಕಲಂ 94–ಎರ ಅಡಿ ಪ್ರದತ್ತವಾದ ಅಧಿಕಾರ ಅಡಿ ಚಲಾಯಿಸಿ ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಳಗಿನಂತೆ ಪುನರ್ ರಚಿಸಲಾಗಿದೆ.

| ಹೆಸರು : ಪದನಾಮ | ಪ್ರವರ್ಗ |
|---|---|
| 1) ಶ್ರೀ ಸುನಿಲ್ ವಲ್ಲ್ಯಾಪುರ, ಶಾಸಕರು ಚಿಂಚೋಳಿ ತಾಲ್ಲೂಕು. | ಅಧ್ಯಕ್ಷರು |
| 2) ಶ್ರೀ ಮಂಗಳಮೂರ್ತಿ ಶಿವನಾಗಪ್ಪ ಕರ್ಚಖೇಡ, ಮು.ಪೋ. ಗಡಿಕೇಶ್ವರ, ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| 3) ಡಾ॥ ಆಂಜನಯ್ಯಾ ಬಿನ್ ರಾಮಯ್ಯ ಮೋಗತಂ ಪೋ. ಕೊಂಚಾವರಂ ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಸದಸ್ಯರು (ಪ.ಜಾತಿ) |
| 4) ಶ್ರೀಮತಿ ಶಿವಲೀಲಾ ಕೋಂ ತೇವಣಸಿದ್ದಪ್ಪಾ ಏರಿ ಮು. ಗಡಿಕೇಶ್ವರ ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಸದಸ್ಯರು (ಮಹಿಳೆ) |
| 5) ತಹಶೀಲ್ದಾರ್, ಚಿಂಚೋಳಿ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಜೆ. ಲಕ್ಷ್ಮೀನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಪಿ.ಆರ್. 565**

## KARNATAKA GOVERNOR'S SECRETARIAT

**NOTIFICATION**

**NO. GS 4 VUM 2012, Bangalore, Dated: 024th July, 2012**

WHEREAS, the tenure of Prof Suresh S. Honnappagol, Vice-Chancellor, Karnataka Veterinary, Animal and Fisheries Sciences University, Bidar expires on the afternoon of 25th July 2012.

AND WHEREAS, the selection of a suitable candidate for filling this position on regular basis has not been completed.

NOW, THEREFORE, I, H.R. BHARDWAJ, Governor of Karnataka and Chancellor of Universities in Karnataka, in exercise of the powers conferred on me by Section 15 of the Karnataka Veterinary, Animal and Fisheries Sciences University Act, 2004, hereby appoint Dr. S. Mallikarjunappa, the Senior-most Professor of the University to act as Vice-Chancellor with effect from 26-07-2012, in terms of Section 13(2) of the Karnataka Veterinary, Animal and Fisheries Sciences University Act, 2004 for a period of two months.

**H.R. BHARDWAJ,**
Governor of Karnataka & Chancellor of Universities.
**R. KALPANA,**
Under Secretary to Governor

**P.R. 564**

## ಜಲಸಂಪನ್ಮೂಲ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಜಸಂಇ 224 ಕೆಬಿಎನ್ 2012, ಬೆಂಗಳೂರು, ದಿನಾಂಕ: 25ನೇ ಜುಲೈ, 2012.**

ಶ್ರೀ ಪ್ರದೀಪ್ ಸಿಂಗ್ ಕರೋಲಾ, ಭಾ.ಆ.ಸೇ. ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ–1 ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್147 (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರಾಗಿ ಶ್ರೀ ಐ.ಎಸ್.ಎನ್. ಪ್ರಸಾದ್, ಭಾ.ಆ.ಸೇ. ಅವರ ಸ್ಥಾನದಲ್ಲಿ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಡಿ. ಧಮನ್,**
ವಿಶೇಷ ಕರ್ತವ್ಯಾಧಿಕಾರಿ,
ಜಲಸಂಪನ್ಮೂಲ ಇಲಾಖೆ (ಕೃಭಾಜನಿ)

**ಪಿ.ಆರ್. 566**

## ಜಲಸಂಪನ್ಮೂಲ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಜಸಂಇ 224 ಕೆಬಿಎನ್ 2012, ಬೆಂಗಳೂರು, ದಿನಾಂಕ: 25ನೇ ಜುಲೈ, 2012.**

ಶ್ರೀ ಜಗದೀಶ್ ಶೆಟ್ಟರ್, ಮುಖ್ಯಮಂತ್ರಿಗಳು ಇವರನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ಮೆಮೊರಾಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 147 (ಸಿ)ರಲ್ಲಿ ಪ್ರದತ್ತವದ ಅಧಿಕಾರವನ್ನು ಚಲಾಯಿಸಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನಾಮನಿರ್ದೇಶನ ಮಾಡಿ, ಆರ್ಟಿಕಲ್ 149(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ಅಧ್ಯಕ್ಷರಾಗಿದ್ದ ಶ್ರೀ ಡಿ. ವಿ. ಸದಾನಂದಗೌಡ ರವರ ಸ್ಥಾನದಲ್ಲಿ ದಿನಾಂಕ : 12–07–2012 ರಿಂದ ಜಾರಿಗೆ ಬರುವಂತೆ ಅಧ್ಯಕ್ಷರಾಗಿ ನೇಮಕಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಡಿ. ಧಮನ್,**
ವಿಶೇಷ ಕರ್ತವ್ಯಾಧಿಕಾರಿ,
ಜಲಸಂಪನ್ಮೂಲ ಇಲಾಖೆ (ಕೃಭಾಜನಿ).

**ಪಿ.ಆರ್. 567**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 149 ಮುನೋಮು 2010, ಬೆಂಗಳೂರು, ದಿನಾಂಕ: 21ನೇ ಜುಲೈ, 2012.**

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಲಿಯಿಂದ ಎಲೆಕ್ಟ್ರಾನಿಕ್ ಸಿಟಿ ಫೇಸ್–II ರಲ್ಲಿನ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕೆ.ಐ.ಎ.ಡಿ.ಬಿ.ಯಿಂದ ಹಂಚಿಕೆಯಾಗಿದ್ದ ಸರ್ವೆ ನಂ 36(ಪಿ)ರಲ್ಲಿನ ನಿವೇಶನದ ನೋಂದಣಿಗೆ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ವಿನಾಯ್ತಿಯನ್ನು ಕರ್ನಾಟಕ ಮುದ್ರಾಂಕ ಕಾಯ್ದೆ 1957ರ ಕಲಂ 9(1)ರಡಿ ನೀಡಿ ಸರ್ಕಾರವು ಆದೇಶಿಸಿದೆ.

ಈ ಅಧಿಸೂಚನೆಯನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ : ಆಇ 554 ವೆಚ್ಚ–7/2012 ದಿನಾಂಕ : 09–07–2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೆ. ರಾಮಚಂದ್ರ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಪಿ.ಆರ್. 568**

## ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಇಡಿ 605 ಎಲ್‌ಐಬಿ 2011, ಬೆಂಗಳೂರು, ದಿನಾಂಕ: 19ನೇ ಜುಲೈ, 2012.**

ಇದೇ ಸಮಸಂಖ್ಯೆಯ ದಿನಾಂಕ : 05–01–2012ರ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ : 17(1)(ಹೆಚ್)–2ರಲ್ಲಿನ ಶ್ರೀ ಎಸ್. ಗಣೇಶ ಬಿನ್ ಎ. ಸುಬ್ರಮಣಿ, ನಂ. 2624, 2ನೇ ಕ್ರಾಸ್, ಗಾಂಧಿನಗರ, ಮಂಡ್ಯ ಇವರು ದಿನಾಂಕ : 01–02–2012ರಂದು ನಿಧನರಾಗಿರುವುದರಿಂದ ಸದರಿಯವರ ಬದಲಾಗಿ ಶ್ರೀ ಎಂ. ಅರ್. ಗಿರೀಶ್ ಬಿನ್ ಲೇಟ್ ಎಂ. ವಿ. ರಾಮಸ್ವಾಮಿ, ನಂ. 1552, 2ನೇ ಕ್ರಾಸ್, ವಿದ್ಯಾನಗರ, ಮಂಡ್ಯ ಇವರನ್ನು ನಾಮಕರಣ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಿ. ಪಟಗಾರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ (ಸಾಮಾನ್ಯ)

**ಪಿ.ಆರ್. 569**

## ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ/48/ವಾಪ್ರಸಿ/2012, ಬೆಂಗಳೂರು, ದಿನಾಂಕ: 24ನೇ ಜುಲೈ, 2012.**

ಶ್ರೀ ಎಂ. ರವಿಕುಮಾರ್, ಜಂಟಿ ನಿರ್ದೇಶಕರು, ವಾರ್ತಾ ಇಲಾಖೆ ಹಾಗೂ ವ್ಯವಸ್ಥಾಪಕ ನಿರ್ದೇಶಕರು (ಅಧಿಕ ಪ್ರಭಾರ) ಶ್ರೀ ಕಂಠೀರವ ಸ್ಟುಡಿಯೋಸ್ ನಿಯಮಿತ, ಬೆಂಗಳೂರು ಇವರನ್ನು ಆರ್ಟಿಕಲ್ ಆಫ್ ಅಸೋಸಿಯೇಷನ್ಸ್ 75(ಎ)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶ್ರೀ ಕಂಠೀರವ ಸ್ಟುಡಿಯೋದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಮಂಜುಳ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ, ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ (ವಾರ್ತಾ ಶಾಖೆ)

**ಪಿ.ಆರ್. 570**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 143 ಎಲ್‌ಆರ್‌ಎ 2012, ಬೆಂಗಳೂರು, ದಿನಾಂಕ: 18ನೇ ಜುಲೈ, 2012.**

ಕರ್ನಾಟಕ ಭೂ ಸುಧಾರಣೆ ಅಧಿನಿಯಮ (1961)ರ ಕಲಂ 48ರ ಉಪ ಕಲಂ (1) ರಿಂದ (3)ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕಿನ ಭೂ ನ್ಯಾಯ ಮಂಡಳಿಗೆ ಸಂಬಂಧಿಸಿದಂತೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ : ಕಂಇ 149 ಎಲ್‌ಆರ್‌ಎ 2008 ದಿನಾಂಕ : 21–01–2009ನ್ನು ಭಾಗಶಃ ಮಾರ್ಪಡಿಸಿ "ಶ್ರೀ ಯಲ್ಲಪ್ಪ ಭೀಮಪ್ಪ ಕಾಟಕರ ಹಾಗೂ ಶ್ರೀ ರವಿ ಹನುಮಂತಪ್ಪ ಎಲಿಗಾರ" ಇವರ ನಾಮ ನಿರ್ದೇಶನ ರದ್ದುಪಡಿಸಿ ಅವರ ಬದಲಿಗೆ ಕ್ರಮವಾಗಿ "ಶ್ರೀ ಕಲ್ಮೇಶ ಡಿ, ಹಾವೇರಿ ಪೇಟೆ ಹಾಗೂ ಮಡಿವಾಳಪ್ಪ ಚೆನ್ನಪ್ಪ ಉಳವಣ್ಣವರ" ಇವರನ್ನು ನಾಮನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಯನ್ನು ಪುನರ್ ರಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎನ್. ಶ್ರೀನಿವಾಸ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್. 571**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ : 38 : ಎಲ್‌ಜಿಹೆಚ್ : 2011, ಬೆಂಗಳೂರು, ದಿನಾಂಕ: 12ನೇ ಜುಲೈ, 2012.**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964) 5 ಕಲಂ 94 (ಎ)(1)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಹಾಸನ ಜಿಲ್ಲೆಯ, ಸಕಲೇಶಪುರ ತಾಲ್ಲೂಕು, ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಈ ಕೆಳಕಂಡ ವ್ಯಕ್ತಿಗಳೊಂದಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ರಚಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪ್ರವರ್ಗ |
|---|---|---|
| 1. | ಶ್ರೀ ಹೆಚ್. ಕೆ. ಕುಮಾರಸ್ವಾಮಿ, ವಿಧಾನಸಭಾ ಸದಸ್ಯರು, ಸಕಲೇಶಪುರ ವಿಧಾನಸಭಾಕ್ಷೇತ್ರ | ಅಧ್ಯಕ್ಷರು |
| 2. | ಶ್ರೀ ಇ. ಆರ್. ದೊಡ್ಡೇಗೌಡ ಬಿನ್ ರಾಮೇಗೌಡ, ರಿಟೈರ್ಡ್ ಡೆಪ್ಯೂಟಿ ತಹಶೀಲ್ದಾರ್ ರವರು, ಈಚಲಬೀಡು ಗ್ರಾಮ ಮತ್ತು ಅಂಚೆ, ಯಸಳೂರು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| 3. | ಶ್ರೀ ಮಂಜಪ್ಪ ಬಿನ್ ತಿಮ್ಮಯ್ಯ ಸಿದ್ದಾಪುರ, ಹಾಲೇಬೇಲೂರು ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ಸದಸ್ಯರು (ಪರಿಶಿಷ್ಟ ಜಾತಿ) |
| 4. | ಶ್ರೀಮತಿ ಬೃಂದಾ ಮಹೇಶ್ ಕೋಂ ಮಹೇಶ್ ಗುಡಾಣಕೆರೆ ಗ್ರಾಮ, ಹೆಗ್ಗದ್ದೆ ಅಂಚೆ, ಹಾನುಬಾಳು ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ಸದಸ್ಯರು (ಮಹಿಳೆ) |
| 5. | ತಹಶೀಲ್ದಾರರು, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ. | ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೆ. ರಾಮಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂ ಮಂಜೂರಾತಿ–1)

**ಪಿ.ಆರ್. 572**

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 140 ಎಂಆರ್ಇ 2012, ಬೆಂಗಳೂರು, ದಿನಾಂಕ: 11ನೇ ಜುಲೈ, 2012.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 66 ಎಂಆರ್ಇ 2012 ದಿನಾಂಕ : 02/03/2012 ಕ್ರಮ ಸಂಖ್ಯೆ : (02) ರಲ್ಲಿ ಶ್ರೀಮತಿ ಕೋಮಲಾ ಕೋಂ ಜಗದೀಶ್, ದೇಖ್ಲ ಗ್ರಾಮ, ಕುಂಬರಡಿ ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ ಇವರನ್ನು ಸಕಲೇಶಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಸದಸ್ಯರನ್ನಾಗಿ ನೇಮಿಸಿದ್ದು, ಸದರಿಯವರು ಪ್ರಸ್ತುತ ಸಮಿತಿಯ ಸಭೆಯಲ್ಲಿ ಹಾಜರಾಗಲು ಸಾಧ್ಯವಾಗದ ಕಾರಣ ಸದಸ್ಯತ್ವವನ್ನು ರದ್ದುಪಡಿಸುವಂತೆ ಕೋರಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1) (ix)ರನ್ವಯ ಶ್ರೀಮತಿ ಕೋಮಲಾ ಕೋಂ ಜಗದೀಶ್, ದೇಖ್ಲ ಗ್ರಾಮ, ಕುಂಬರಡಿ ಅಂಚೆ, ಕಸಬಾ ಹೋಬಳಿ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ ಇವರ ನಾಮ ನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೆ. ವಾಸುದೇವ ಮೂರ್ತಿ,**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಹಕಾರ ಇಲಾಖೆ.

**ಪಿ.ಆರ್. 573**

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 98 ಎಲ್‌ಡಬ್ಲ್ಯೂಎ 2012, ಬೆಂಗಳೂರು, ದಿನಾಂಕ: 24ನೇ ಜುಲೈ, 2012.**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ : 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ **"ಇಂಡಸ್ಟ್ರಿ ಜನರೇಟಿಂಗ್ ಪವರ್"** ಉದ್ಯಮವನ್ನು ಅಧಿಸೂಚನೆ ಸಂಖ್ಯೆ : ಕಾಇ 130 ಎಲ್‌ಡಬ್ಲ್ಯೂಎ 2011, ದಿನಾಂಕ : 24–02–2012ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ : 03–01–2012 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ : 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ **"ಇಂಡಸ್ಟ್ರಿ ಜನರೇಟಿಂಗ್ ಪವರ್"** ಉದ್ಯಮವನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ : 03–07–2012 ರಿಂದ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

**ಪಿ.ಆರ್. 575**

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಾರಿಇ 25 ಸಾಸಂಸೇ 2012, ಬೆಂಗಳೂರು, ದಿನಾಂಕ: 02ನೇ ಆಗಸ್ಟ್, 2012.**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು, 1961ರ ನಿಯಮ 3ರ ಉಪನಿಯಮ (2)ರಂತೆ ಶ್ರೀ ಆರ್. ಅಶೋಕ, ಉಪ ಮುಖ್ಯಮಂತ್ರಿಗಳು ಗೃಹ ಮತ್ತು ಸಾರಿಗೆ ಇವರನ್ನು (1) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ (2) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗಳ ನಿರ್ದೇಶಕ ಮಂಡಳಿಯಲ್ಲಿ ಅಧಿಕಾರಯುತ ನಿರ್ದೇಶಕರನ್ನಾಗಿ ಹಾಗೂ ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5ರ ಉಪಕಲಂ 2 ರಂತೆ (1) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, (2) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗಳ ಮಂಡಳಿ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ

**ಪಿ.ಆರ್. 576**

## TRANSPORT SECRETARIAT

### NOTIFICATION

### NO. SARIE 11 SAENI 2012, Bangalore, Dated: 03rd August, 2012.

In exercise of the powers conferred by sub-clause (1) of section-16 of the Karnataka Motor Vehicle Taxation Act, 1957 (Karnataka Act 35 of 1957) the Government of Karnataka, hereby exempt from payment of Road Tax and also payment of Registration fee to the following Personal vehicle of Dr. Silvia Hostettler, Counsellor of Consulate General of Switzerland.

Name of the Foreign

Representation : Dr. Silvia Hostettler, Counsellor of Consulate General

Personal Vehicle : 05 CC 4A (Toyota, Innova)

(*Vehicle No. to be assigned by the jurisdictional R.T.O.)

By Order and in the Name of the Governor of Karnataka,

**RAMACHANDRA,**

Under Secretary to Government,

Transport Department.

**P.R : 577**

## HOME SECRETARIAT

### NOTIFICATION

### NO. HD 301 SST 2012, Bangalore, Dated : 12th July, 2012.

In exercise of the powers conferred by sub-clause (a) of clause (8) of Section 2 of the Official Secrets Act, 1923 (Central Act XIX of 1923) read with Notification No. 21/20/62 Poll (1), dated 4th May, 1963 of the Government of India, Ministry of Home Affairs, New Delhi, the Government of Karnataka hereby declares that the place specified in column (2) of the Schedule below with the area boundaries and survey no. specified in columns (3), (4) and (6) of the respective villages specified in column (5) shall be prohibited place for the purpose of the said Act.

**SCHEDULE**

| Sl. No. | Name of the Place | Total Area | Boundaries | Village | Survey No. |
|---|---|---|---|---|---|
| (1) | (2) | (3) | (4) | (5) | (6) |
| 1 | Indian Strategic Petroleum Reserves Ltd., Chandrahas Nagar, Permude Post, Mangalore-574509 | 100.02 Acres | North : Land belonging to OMPL<br>South : MSEZ land<br>East : MSEZ land<br>West : Corridar Road | Bajpe | 68/1A, 68/1BP, 68/1 CP, 68/1 DP, 68/1 E1 AP |
| | | | | Permude | 115/1 P, 115/2, 115/3, 117/1P, 117/2, 118/P, 157/1D1AP, 157/1D1B, 157/1D1C, 195/3A, 195/3BP, 195/4P, 195/5, 195/6, 195/7, 210/1P, 222/2AP, 222/2BP, 223/4P. |
| | | | | Kalavaru | 1/P, 20/1P, 20/2, 21/1P, 21/2, 21/3P, 21/4P, 21/5, 21/6, 21/7P, 21/8, 21/9, 21/10AP, 21/10B, 21/13P, 21/14, 21/16P, 76/1AP, 76/1B, 76/2, 76/3, 80/1, 80/2AP, 81/2, 81/1, 83/1, 83/2, 85/1, 85/2, 85/3, 85/4, 85/5, 85/6, 89/1P, 89/2P, 89/4P, 21/15, 102/1, 102/2, 102/3, 102/4. |

By Order and in the Name of the Governor of Karnataka,

**PRAKASH Y.K,**

Under Secretary to Government,

Home Department [Law & Order]

**P.R. 538**

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ಸಂಖ್ಯೆ: ಕಸಂವಾಪ್ರ 149 ಕೆಎಂಯು 2011 ಬೆಂಗಳೂರು, ದಿನಾಂಕ: 05–04–2012**

**ಅಧಿಸೂಚನೆ**

ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ವಿಜಾಪುರ ನಗರದಲ್ಲಿರುವ ಚಬುಕ್ ಸವಾರನ ದರ್ಗಾವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ. ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳು ಅಧಿನಿಯಮ, 1961ರ ಕಲಂ 4(1)ರ (ಕರ್ನಾಟಕ ಆಕ್ಟ್ ಆಫ್ 1962) ಅಡಿಯಲ್ಲಿ ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯಪಟ್ಟಿದೆ. ಈ ಉದ್ದೇಶದಿಂದ ಸದರಿ ದೇವಸ್ಥಾನವನ್ನು ರಾಜ್ಯ ಸಂರಕ್ಷಿತ ಸ್ಮಾರಕವನ್ನಾಗಿ ಘೋಷಿಸಲು 60 ದಿನಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿದೆ. ಈ ಸಂಬಂಧ ಕುರಿತಾದ ಆಕ್ಷೇಪಣೆಗಳನ್ನು ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ವಿಕಾಸ ಸೌಧ, ಬೆಂಗಳೂರು–560 001 ಇವರಿಗೆ ಸಲ್ಲಿಸಬಹುದು.

ಈ ಸ್ಮಾರಕವನ್ನು ರಾಜ್ಯ ಸಂರಕ್ಷಿತ ಸ್ಮಾರಕವೆಂದು ಘೋಷಿಸುವ ಬಗ್ಗೆ ಯಾವುದೇ ರೀತಿಯ ಆಕ್ಷೇಪಣೆಗಳು ಬಾದಿತದಾರರಿಂದ ಮೇಲ್ಕಾಣಿಸಿದ ಅವಧಿಯೊಳಗೆ ರಾಜ್ಯ ಸರ್ಕಾರವು ಸ್ವೀಕರಿಸಿದಲ್ಲಿ ಸರ್ಕಾರವು ಅದನ್ನು ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳುವುದು. ತಡವಾಗಿ ಸ್ವೀಕರಿಸಲಾಗುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್,ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

**ಪ ರಿ ವಿ ಡಿ**

**(ಅಧಿಸೂಚನೆ ಸಂಖ್ಯೆ; ಕಸಂವಾಪ್ರ 149 ಕೆಎಂಯು 2011 ದಿನಾಂಕ: 05–04–2012)**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | | ಮೇರೆಗಳು (ಚಕ್ಕುಬಂದಿ) | | ಒಡೆತನ | ಷರಾ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | | 7 | | 8 | 9 |
| ವಿಜಾಪೂರ ಜಿಲ್ಲೆ | ವಿಜಾಪೂರ ತಾಲ್ಲೂಕು | ಮಹಾಲ ಬಾಗಾಯತ ಗ್ರಾಮ | ಚಬುಕ್ ಸವಾರನ ದರ್ಗಾ | ಈ ದರ್ಗಾ ರೆವಿನ್ಯೂ ಸರ್ವೆ ನಂ.36 ಕ್ಷೇತ್ರ 24ಎ 25 ಗುಂಟೆಯಲ್ಲಿದೆ | ಚಬುಕ್ ಸವಾರನ ದರ್ಗಾದ ರೆವಿನ್ಯೂ ಸರ್ವೆ ನಂ.36 ಕ್ಷೇತ್ರ 24ಎ 25 ಗುಂಟೆಯಲ್ಲಿದೆ | 5345 ಚ.ಅ. | **ಪೂರ್ವಕ್ಕೆ :** | ಸರ್ವೆ ನಂ. 36ರ ಉಳಿದ ಭಾಗ | ಈ ಸ್ಮಾರಕವು ಕರ್ನಾಟಕ ವಕ್ಫ್ ಮಂಡಳಿ, ಬೆಂಗಳೂರು, ಇವರ ಆಡಳಿತಕ್ಕೆ ಒಳಪಟ್ಟಿರುತ್ತದೆ. | 17ನೇ ಶತಮಾನದ ಐತಿಹಾಸಿಕವಾಗಿ ಮಹತ್ವವುಳ್ಳ ದರ್ಗಾ ಆಗಿರುತ್ತದೆ. |
| | | | | | | | **ಪಶ್ಚಿಮಕ್ಕೆ** | ಸರ್ವೆ ನಂ. 31 | | |
| | | | | | | | **ಉತ್ತರಕ್ಕೆ:** | ಸರ್ವೆ ನಂ. 37 | | |
| | | | | | | | **ದಕ್ಷಿಣಕ್ಕೆ :** | ಸರ್ವೆ ನಂ. 34 | | |
| | | | | | **ಒಟ್ಟು** | **5345 ಚ.ಅ.** | | | | |

**ಪಿ.ಆರ್. 554**

**ಎನ್,ಗೀತಾಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ)

## ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ಸಂಖ್ಯೆ: ಕಸಂವಾಪ್ರ 66 ಕೆಎಂಯು 2009 ಬೆಂಗಳೂರು, ದಿನಾಂಕ: 21.05.2011**

### ಅಧಿಸೂಚನೆ

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ನಿಯಮಗಳು 2010ರ ಕರಡನ್ನು ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಅಧಿನಿಯಮ, 2002ರ (2003ರ ಕರ್ನಾಟಕ ಅಧಿನಿಯಮ ಸಂಖ್ಯೆ 18) 33ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಅಗತ್ಯಪಡಿಸಿದಂತೆ ದಿನಾಂಕ 06.01.2011ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯ ಭಾಗ–4ಎ ರಲ್ಲಿ ಅಧಿಸೂಚನೆ ಸಂಖ್ಯೆ ಕಸಂವಾಪ್ರ 66 ಕೆಎಂಯು 2009, ದಿನಾಂಕ 09.12.2010 ರಲ್ಲಿ ಪ್ರಕಟಿಸಿ, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ನಿಯಮಗಳು ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿದ್ದರಿಂದ;

ಮತ್ತು ಸದರಿ ರಾಜ್ಯ ಪತ್ರವನ್ನು ದಿನಾಂಕ 06.01.2011 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದುದರಿಂದ;

ಮತ್ತು ಆ ಬಗ್ಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗಿಲ್ಲದಿರುವುದರಿಂದ;

ಈಗ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಅಧಿನಿಯಮ 2002ರ (2003 ರ ಕರ್ನಾಟಕ ಅಧಿನಿಯಮ ಸಂಖ್ಯೆ 18) 33ನೇ ಪ್ರಕರಣದ (1) ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ ಎಂದರೆ:–

### ನಿಯಮಗಳು

### ಅಧ್ಯಾಯ –I

### ಪ್ರಾರಂಭಿಕ

**1. ಶೀರ್ಷಿಕೆ ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಅವು, ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ನಿಯಮಗಳಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(i) "ಅಧಿನಿಯಮ" ಎಂದರೆ, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ ಅಧಿನಿಯಮ, 2002 (2003ರ ಕರ್ನಾಟಕ ಅಧಿನಿಯಮ ಸಂಖ್ಯೆ 18);

(ii) "ನಮೂನೆ" ಎಂದರೆ, ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ;

(iii) "ಸರ್ಕಾರ" ಎಂದರೆ, ಕರ್ನಾಟಕ ರಾಜ್ಯ ಸರ್ಕಾರ;

(iv) "ಪ್ರಕರಣ" ಎಂದರೆ, ಅಧಿನಿಯಮದ ಪ್ರಕರಣ;

(v) "ಭಾ.ಪು.ಸ" ಎಂದರೆ, ಭಾರತ ಪುರಾತತ್ವ ಸರ್ವೇಕ್ಷಣಾ ಇಲಾಖೆ (ಎಎಸ್‌ಐ);

(vi) "ಪು.ಮ.ವ.ಸಂ" ಎಂದರೆ, ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆ, (ಡಿಎಎಂ) ಕರ್ನಾಟಕ ಸರ್ಕಾರ.

### ಅಧ್ಯಾಯ –II

### ಪ್ರಾಧಿಕಾರದ ಭದ್ರತಾ ದಳ

**3. ಪ್ರಾಧಿಕಾರದ ಭದ್ರತಾ ದಳ.–** ಪ್ರಾಧಿಕಾರದ ಭದ್ರತಾ ದಳವು, ಅಧ್ಯಕ್ಷರ ಅಧೀಕ್ಷಣೆ ಮತ್ತು ನಿಯಂತ್ರಣದ ಅಡಿಯಲ್ಲಿ ಅಧಿನಿಯಮದಲ್ಲಿ ಮತ್ತು ಈ ನಿಯಮಗಳಲ್ಲಿ ಹೇಳಿರುವ ಭದ್ರತಾ ವಿಷಯಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ ಪ್ರಾಧಿಕಾರಕ್ಕೆ ನೆರವು ನೀಡತಕ್ಕದ್ದು.

**4. ಪ್ರಾಧಿಕಾರದ ಭದ್ರತಾ ದಳದ ಮುಖ್ಯಸ್ಥನ ಕರ್ತವ್ಯಗಳು.–** ಅಧಿನಿಯಮದ ಅಥವಾ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮದ (1963ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ಉಪಬಂಧಗಳನ್ನು ಅಥವಾ ಅದರ ಮೇರೆಗೆ ರಚಿಸಿದ ಯಾವುವೇ ನಿಯಮಗಳನ್ನು ಅಥವಾ ಉಪ–ವಿಧಿಗಳನ್ನು ಉಲ್ಲಂಘಿಸಿ ಯಾವುದೇ ಅಪರಾಧ ಎಸಗಲು ಮಾಡಿದ ಪ್ರಯತ್ನಗಳ ಬಗ್ಗೆ ಅಧ್ಯಕ್ಷರಿಗೆ ಕೂಡಲೇ ಮಾಹಿತಿ ನೀಡಿ ವರದಿಗಳನ್ನು ಕಳುಹಿಸುವುದು ಪ್ರಾಧಿಕಾರ ಭದ್ರತಾ ದಳದ ಮುಖ್ಯಸ್ಥನ ಕರ್ತವ್ಯವಾಗಿರತಕ್ಕದ್ದು.

**5. ಪ್ರಾಧಿಕಾರದ ಭದ್ರತಾ ದಳದ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಈ ಮುಂದಿನವುಗಳು ಪ್ರಾಧಿಕಾರದ ಭದ್ರತಾ ದಳದ ಕರ್ತವ್ಯಗಳಾಗಿರತಕ್ಕದ್ದು,–

(1) (ಎ) ಅತಿಕ್ರಮಣವನ್ನು ತಡೆಗಟ್ಟುವುದನ್ನೂ ಒಳಗೊಂಡಂತೆ ಪ್ರಾಧಿಕಾರಕ್ಕೆ ಸೇರಿದ ಯಾವುದೇ ಭೂಮಿಯ ಮೇಲಿನ ಅನಧಿಕೃತ ಅಧಿಭೋಗಕ್ಕೆ;

(ಬಿ) ಪ್ರಾಧಿಕಾರಕ್ಕೆ ಸೇರಿದ ಭೂಮಿಯಲ್ಲಿ ಅನಧಿಕೃತ ಕಟ್ಟಡಗಳ ನಿರ್ಮಾಣಕ್ಕೆ ಮತ್ತು ಲೇಔಟ್‌ಗಳ ನಿರ್ಮಾಣಕ್ಕೆ;

(ಸಿ) ವಿಭಾಗೀಯ ವಿನಿಯಮಗಳ ಉಪಬಂಧಗಳನ್ನು ಅಥವಾ ಪ್ರಾಧಿಕಾರವು ಅನುಮೋದಿಸಿದ ನಕ್ಷೆಯನ್ನು ಉಲ್ಲಂಘಿಸಿ ನಿರ್ಮಿಸಿದ ಕಟ್ಟಡಗಳಿಗೆ;

(ಡಿ) ಸ್ಥಳೀಯ ಯೋಜನಾ ಪ್ರದೇಶದೊಳಗೆ ಪ್ರಾಧಿಕಾರದ ಪೂರ್ವಾನುಮೋದನೆ ಪಡೆಯದೆ, ಈ ಅಧಿನಿಯಮದ ಮತ್ತು ಈ ಮುಂದಿನ ಅಧಿನಿಯಮಗಳ, ಎಂದರೆ:–

(i) ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961 (1963ರ ಕರ್ನಾಟಕ ಅಧಿನಿಯಮ ಸಂಖ್ಯೆ 11)

(ii) ಕರ್ನಾಟಕ ಪೌರಸಭೆಗಳ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 22)

(iii) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14)

(iv) ಕರ್ನಾಟಕ ಭೂ ಕಂದಾಯ ಅಧಿನಿಯಮ, 1964 (1964ರ ಕರ್ನಾಟಕ ಅಧಿನಿಯಮ ಸಂಖ್ಯೆ 12)

– ಇವುಗಳ ಮೇರೆಗೆ ಅಪರಾಧವೆನಿಸುವ ಭೂ ಬಳಕೆಯ ಬದಲಾವಣೆ ಎಂದು ಪರಿಗಣಿತವಾಗುವ ನಿರ್ಮಾಣಗಳಿಗೆ,

– ಸಂಬಂಧಪಟ್ಟಂಥ ಯಾವುದೇ ಅಪರಾಧ ಮಾಡುವುದನ್ನು ಅಥವಾ ಮಾಡಲು ಪ್ರಯತ್ನಿಸುವುದನ್ನು ಅಥವಾ ಅಪರಾಧ ಮಾಡಲು ಒಳಸಂಚು ಮಾಡುವುದನ್ನು ಪತ್ತೆಹಚ್ಚುವುದು ಮತ್ತು ಅಪರಾಧದಲ್ಲಿ ತೊಡಗಿರುವ ವ್ಯಕ್ತಿಗಳನ್ನು ಗುರುತಿಸುವುದು ಅವರ ಬಗ್ಗೆ ತನಿಖೆ ನಡೆಸುವುದು ಮತ್ತು ಕ್ರಮ ಜರುಗಿಸುವುದು.

(2) ಪ್ರಾಧಿಕಾರದ ಭದ್ರತಾ ದಳವು, ಪ್ರಾಧಿಕಾರವು ನಿರ್ಧರಿಸಿದಂತೆ ಅವಶ್ಯವಿರುವೆಡೆಗಳಲ್ಲೆಲ್ಲಾ ಸ್ಮಾರಕಗಳ ಸುತ್ತಮುತ್ತಲೂ ರಾತ್ರಿ ಗಸ್ತಿಗೆ ವ್ಯವಸ್ಥೆ ಮಾಡತಕ್ಕದ್ದು.

(3) ಭದ್ರತಾ ದಳವು, ಭಾರತ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಭದ್ರತಾ ವಿಭಾಗದೊಂದಿಗೆ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆಯೊಂದಿಗೆ, ಸ್ಥಳೀಯ ಪ್ರಾಧಿಕಾರದೊಂದಿಗೆ ಮತ್ತು ಸಂಬಂಧಪಟ್ಟ ಇತರ ಇಲಾಖೆಗಳೊಂದಿಗೆ ಸಮನ್ವಯ ಸಾಧಿಸತಕ್ಕದ್ದು ಮತ್ತು ಸಹಕರಿಸತಕ್ಕದ್ದು.

(4) ಭದ್ರತಾ ದಳದ ಮುಖ್ಯಸ್ಥನು, ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಹೊರಹಾಕುವ) ಅಧಿನಿಯಮ, 1974ರ ಮೇರೆಗೆ ಕ್ರಮ ಕೈಗೊಳ್ಳುವುದಕ್ಕಾಗಿ ಅಧಿನಿಯಮದ 37ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ ಮೇರೆಗೆ ಸಕ್ಷಮ ಅಧಿಕಾರಿಯೆಂದು ಘೋಷಿಸಲಾದ ಅಧಿಕಾರಿಯಾಗಿರತಕ್ಕದ್ದು.

(5) ಪ್ರಾಧಿಕಾರ ಭದ್ರತಾ ದಳವು, ಭದ್ರತಾ ವಿಷಯಗಳ ಮೇಲೆ ಕಾಲಕಾಲಕ್ಕೆ ತೆಗೆದುಕೊಳ್ಳುವ ತೀರ್ಮಾನಗಳನ್ನು ಜಾರಿಗೆ ತರಲು ಪ್ರಾಧಿಕಾರಕ್ಕೆ ನೆರವಾಗತಕ್ಕದ್ದು.

(6) ಪ್ರಾಧಿಕಾರ ಭದ್ರತಾ ದಳವು, ಸ್ಥಳೀಯ ಯೋಜನಾ ಪ್ರದೇಶದ ಗಡಿಗಳನ್ನು ಕಾಪಾಡಿಕೊಂಡು ಬರುವಲ್ಲಿ ಪ್ರಾಧಿಕಾರಕ್ಕೆ ನೆರವಾಗತಕ್ಕದ್ದು.

(7) ಪ್ರಾಧಿಕಾರಕ್ಕೆ ನಿಯತಕಾಲಿಕ ವಿವರ ಪತ್ರಗಳು ಅಥವಾ ಪ್ರಗತಿ ವರದಿಗಳನ್ನು ಕಳುಹಿಸುವುದು ಪ್ರಾಧಿಕಾರ ಭದ್ರತಾ ದಳದ ಮುಖ್ಯಸ್ಥನ ಕರ್ತವ್ಯವಾಗಿರತಕ್ಕದ್ದು.

(8) ಅಧಿನಿಯಮದ ಮತ್ತು ಈ ನಿಯಮಗಳ ಉದ್ದೇಶಗಳನ್ನು ಸಾಧಿಸುವ ದೃಷ್ಟಿಯಿಂದ ಪ್ರಾಧಿಕಾರದ ಭದ್ರತಾ ದಳದ ಮುಖ್ಯಸ್ಥನು, ಭದ್ರತಾ ದಳವು ಸದಾ ಜಾಗೃತವಾಗಿದೆಯೇ ಮತ್ತು ಅದರ ಆರಕ್ಷಕರ ಮತ್ತು ಸಾಧನ ಸಾಮಗ್ರಿಗಳ ಸ್ಥಿತಿ ಉತ್ತಮವಾಗಿದೆಯೇ ಎಂಬುದನ್ನು ಗಮನಿಸತಕ್ಕದ್ದು.

## ಅಧ್ಯಾಯ –III

## ರಾಜ್ಯಮಟ್ಟದ ಸಲಹಾ ಸಮಿತಿ

6. **ಸಭೆಯ ನೋಟೀಸು.**– (1) ರಾಜ್ಯಮಟ್ಟದ ಸಲಹಾ ಸಮಿತಿಯ ಕಾರ್ಯಕಲಾಪ ನಿರ್ವಹಣೆಗಾಗಿ ಸಭೆಯನ್ನು, ಅಧ್ಯಕ್ಷನು ಅಥವಾ ಅಧ್ಯಕ್ಷನ ವ್ಯಕ್ತ ಅನುಮೋದನೆ ಪಡೆದು ಸದಸ್ಯ ಕಾರ್ಯದರ್ಶಿಯು ಕರೆಯತಕ್ಕದ್ದು.

(2) ಅಂಥ ಸಭೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ನಿರ್ದಿಷ್ಟಪಡಿಸುವ ಪೂರ್ಣ ಏಳು ದಿನಗಳ ಸೂಚನೆಯನ್ನು ಮತ್ತು ಅಲ್ಲಿ ನಡೆಸಬೇಕಾಗಿರುವ ಕಾರ್ಯಕಲಾಪಗಳ ಕಾರ್ಯಸೂಚಿಯನ್ನು, ಸದಸ್ಯ ಕಾರ್ಯದರ್ಶಿಯು ಸಂಬಂಧಪಟ್ಟವರಿಗೆ ನೀಡತಕ್ಕದ್ದು.

7. **ಕೋರಂ.–** ಕೋರಂನ ಪಾಲನೆಗಾಗಿ, ಸಭೆಯಲ್ಲಿ ಹಾಜರಿರುವ ಸದಸ್ಯರ ಸಂಖ್ಯೆಯು, ಒಟ್ಟು ಸಂಖ್ಯೆಯ ಮೂರನೇ ಒಂದಕ್ಕಿಂತ (1/3) ಕಡಿಮೆ ಇದ್ದರೆ, ಪೀಠಾಸೀನ ಅಧಿಕಾರಿಯು, 15 ನಿಮಿಷಗಳ ಕಾಲ ಕಾದುನೋಡಿ ಆ ತರುವಾಯ, ಆತನು ಯುಕ್ತವಾಗಿ ನಿಗದಿಪಡಿಸಬಹುದಾದಂಥ ಮುಂದಿನ ಸಮಯಕ್ಕೆ ಅಥವಾ ಇನ್ನಾವುದೇ ಮುಂದಿನ ದಿನಕ್ಕೆ ಸಭೆಯನ್ನು ಮುಂದೂಡತಕ್ಕದ್ದು ಮತ್ತು ಹಾಗೆ ಸಭೆಯನ್ನು ಮುಂದೂಡಿದ ಬಗ್ಗೆ ನೋಟೀಸನ್ನು ಆದಷ್ಟು ಬೇಗ ಸಂಬಂಧಪಟ್ಟ ಸದಸ್ಯರಿಗೆ ನೀಡತಕ್ಕದ್ದು ಮತ್ತು ಮೂಲ ಸಭೆಯಲ್ಲಿ ಕೋರಂ ಇದ್ದಿದ್ದರೆ, ಅದರ ಮುಂದೆ ಯಾವ ಕಾರ್ಯಕಲಾಪವನ್ನು ತರಬೇಕಾಗಿತ್ತೋ ಆ ಕಾರ್ಯಕಲಾಪವನ್ನು ಮುಂದೂಡಿದ ಸಭೆಯ ಮುಂದೆ ತರತಕ್ಕದ್ದು ಮತ್ತು ಅಂಥ ಸಭೆಯಲ್ಲಿ ಕೋರಂ ಇಲ್ಲದಿದ್ದಾಗ್ಯೂ ವಿಲೆ ಮಾಡಬಹುದು.

8. **ಪೀಠಾಸೀನ ಅಧಿಕಾರಿ.–** ಅಧ್ಯಕ್ಷನು ಪ್ರತಿಯೊಂದು ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು. ಯಾವುದೇ ಕಾರಣಕ್ಕಾಗಿ ಅಧ್ಯಕ್ಷನು ಸಭೆಗೆ ಹಾಜರಾಗಲು ಸಾಧ್ಯವಾಗದಿದ್ದರೆ, ಸಭೆಯಲ್ಲಿ ಹಾಜರಿರುವ ಸಹ–ಅಧ್ಯಕ್ಷನು ರಾಜ್ಯಮಟ್ಟದ ಸಲಹಾ ಸಮಿತಿಯ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

9. **ಭಾಗವಹಿಸುವುದು.–** ಸಲಹಾ ಸಮಿತಿಯ ಯಾರೇ ಸದಸ್ಯನು, ತಾನೇ ಸ್ವತಃ ಅಥವಾ ಆತನ ಪಾಲುದಾರನು ಅಥವಾ ಸಂಬಂಧಿಕರು ನೇರವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿರುವ ವಿಷಯದ ಮೇಲಿನ ಚರ್ಚೆಯಲ್ಲಿ ಭಾಗವಹಿಸತಕ್ಕದ್ದಲ್ಲ ಅಥವಾ ಮತ ನೀಡತಕ್ಕದ್ದಲ್ಲ.

10. **ವ್ಯವಹರಣೆಗಳ ದಾಖಲೆ.–** (1) ರಾಜ್ಯಮಟ್ಟದ ಸಲಹಾ ಸಮಿತಿಯ ಸಭೆಯ ವ್ಯವಹರಣೆಗಳನ್ನು ದಾಖಲು ಮಾಡತಕ್ಕದ್ದು ಮತ್ತು ಅಧ್ಯಕ್ಷನ ಅನುಮೋದನೆ ಪಡೆದ ತರುವಾಯ, ಹದಿನೈದು ದಿನಗಳ ಅವಧಿಯೊಳಗೆ ಸದಸ್ಯ–ಕಾರ್ಯದರ್ಶಿಯು ಅದನ್ನು ಸಂಬಂಧಪಟ್ಟ ಸದಸ್ಯರಿಗೆ ಕಳುಹಿಸುವ ವ್ಯವಸ್ಥೆ ಮಾಡತಕ್ಕದ್ದು.

(2) ಯಾರೇ ಸದಸ್ಯನು, ವ್ಯವಹರಣೆಗಳ ದಾಖಲೆಯ ಬಗ್ಗೆ ಅಥವಾ ಅದರ ಯಾವುದೇ ಭಾಗದ ಬಗ್ಗೆ ಸಹಮತ ಹೊಂದಿರದಿದ್ದರೆ, ಆತನು, ಅದನ್ನು ಅಧ್ಯಕ್ಷರ ಗಮನಕ್ಕೆ ತರುವುದಕ್ಕಾಗಿ ಸದಸ್ಯ–ಕಾರ್ಯದರ್ಶಿಗೆ ಏಳು ದಿನಗಳ ಒಳಗಾಗಿ ಅದನ್ನು ತಿಳಿಸತಕ್ಕದ್ದು ಮತ್ತು ಅದರ ಮೇಲಿನ ಅಧ್ಯಕ್ಷರ ತೀರ್ಮಾನವು ಅಂತಿಮವಾದುದಾಗಿರತಕ್ಕದ್ದು.

11. **ವಿಶೇಷ ಸಭೆ.–** ಅಧ್ಯಕ್ಷರು, ರಾಜ್ಯಮಟ್ಟದ ಸಲಹಾ ಸಮಿತಿಯ ವಿಶೇಷ ಅಥವಾ ತುರ್ತು ಸಭೆಯನ್ನು ಕರೆಯುವುದು ಅವಶ್ಯಕವೆಂದು ಭಾವಿಸಿದರೆ, ಅವರು ಮೂರು ದಿನಗಳ ನೋಟೀಸನ್ನು ನೀಡುವ ಮೂಲಕ ಹಾಗೆ ಅಂಥ ಸಭೆಯನ್ನು ಕರೆಯಬಹುದು. ವಿಶೇಷ ಅಥವಾ ತುರ್ತು ಸಭೆಯನ್ನು ಕರೆದಾಗ 6 ರಿಂದ 10ರವರೆಗಿನ ನಿಯಮಗಳ ಉಪಬಂಧಗಳನ್ನು ಅನುಸರಿಸತಕ್ಕದ್ದು.

12. **ಸರ್ಕಾರಕ್ಕೆ ಮಾಹಿತಿ.–** ಸದಸ್ಯ–ಕಾರ್ಯದರ್ಶಿಯು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಆ ಸಂಬಂಧದಲ್ಲಿನ ತೀರ್ಮಾನಗಳನ್ನು ಆದಷ್ಟು ಬೇಗ ಸರ್ಕಾರದ ಮುಂದೆ ಮಂಡಿಸತಕ್ಕದ್ದು.

13. **ಪ್ರಯಾಣ ಭತ್ಯೆ ಮತ್ತು ದಿನಭತ್ಯೆ.–** ಅನುಕ್ರಮವಾಗಿ 6ನೇ ಪ್ರಕರಣದ (2) ಮತ್ತು (3)ನೇ ಉಪ ಪ್ರಕರಣಗಳ ಮೇರೆಗಿನ ಸಭೆಗಾಗಿ ಆಹ್ವಾನಿಸಲಾದ ಸಹಯೋಜಿತ ಸದಸ್ಯರು ಮತ್ತು ತಜ್ಞರು ಕರ್ನಾಟಕ ಸಿವಿಲ್ ಸೇವಾ ನಿಯಮಗಳ ಅನುಬಂಧ–ಎ ಪ್ರಕಾರ ಚಾಲ್ತಿ ದರಗಳಲ್ಲಿ ಪ್ರಯಾಣ ಭತ್ಯೆ ಮತ್ತು ದಿನಭತ್ಯೆ ಪಡೆಯಲು ಅರ್ಹರಾಗಿರತಕ್ಕದ್ದು.

## ಅಧ್ಯಾಯ –IV

## ಆಯುಕ್ತರ ಇತರ ಪ್ರಕಾರ್ಯಗಳು

14. **ಆಯುಕ್ತರ ಇತರ ಪ್ರಕಾರ್ಯಗಳು.–** ಅಧಿನಿಯಮದ 8ನೇ ಪ್ರಕರಣದ (2)ನೇ ಉಪ ಪ್ರಕರಣದ ಮೇರೆಗೆ ಗೊತ್ತುಪಡಿಸಿದ ಪ್ರಕಾರ್ಯಗಳ ಜೊತೆಗೆ ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸುವುದು ಆಯುಕ್ತರ ಕರ್ತವ್ಯವಾಗಿರತಕ್ಕದ್ದು, ಎಂದರೆ:–

(i) ಪ್ರಾಧಿಕಾರದ ಸಭೆಗಳನ್ನು ಕರೆಯುವುದು ಮತ್ತು ಅವುಗಳನ್ನು ನಡೆಸುವುದು ಮತ್ತು ಸಭೆಗಳ ನಡವಳಿಗಳನ್ನು ಸಿದ್ಧಪಡಿಸುವುದು ಮತ್ತು ಪ್ರಾಧಿಕಾರದ ನಿರ್ಣಯಗಳನ್ನು ಕಾರ್ಯಗತಗೊಳಿಸುವುದು:

ಪರಂತು, ಪ್ರಾಧಿಕಾರದ ಯಾವುದೇ ನಿರ್ಣಯವು ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಯಾವುದೇ ಉಪಬಂಧವನ್ನು ಅಥವಾ ಅಧಿನಿಯಮದ ಅಥವಾ ಇತರ ಯಾವುದೇ ಕಾನೂನ ಮೇರೆಗೆ ರಚಿಸಿದ ಅಥವಾ ಹೊರಡಿಸಿದ ಯಾವುದೇ ನಿಯಮ, ಅಧಿಸೂಚನೆ, ವಿನಿಯಮನ ಅಥವಾ ಉಪ–ವಿಧಿಯನ್ನು ಅಥವಾ ಸರ್ಕಾರವು ಹೊರಡಿಸಿದ ಯಾವುದೇ ಆದೇಶವನ್ನು ಉಲ್ಲಂಘಿಸುತ್ತದೆಯೆಂದು ಅಥವಾ ಪ್ರಾಧಿಕಾರದ ಹಾಗೂ ಪರಂಪರೆಯ ಹಿತಾಸಕ್ತಿಗೆ ಪ್ರತಿಕೂಲವಾಗಿದೆಯೆಂದು ಅಥವಾ ಬಾಧಕ ಉಂಟು ಮಾಡುತ್ತಿದೆಯೆಂದು ಆಯುಕ್ತರು ಅಭಿಪ್ರಾಯಪಟ್ಟರೆ, ಅವರು ನಿರ್ಣಯವನ್ನು ಅಂಗೀಕರಿಸಿದ ಹದಿನೈದು ದಿನಗಳ ಒಳಗಾಗಿ, ವಿಷಯವನ್ನು ಆದೇಶಗಳಿಗಾಗಿ ಸರ್ಕಾರಕ್ಕೆ ಉಲ್ಲೇಖಿಸತಕ್ಕದ್ದು ಮತ್ತು ತಾನು ತೆಗೆದುಕೊಂಡ ಕ್ರಮದ ಬಗ್ಗೆ ಪ್ರಾಧಿಕಾರದ ಮುಂದಿನ ಸಭೆಯಲ್ಲಿ ತಿಳಿಸತಕ್ಕದ್ದು ಮತ್ತು ಅಂಥ ಉಲ್ಲೇಖದ ಮೇಲೆ ಸರ್ಕಾರದ ಆದೇಶಗಳನ್ನು ಸ್ವೀಕರಿಸುವವರೆಗೆ, ಆಯುಕ್ತರು ನಿರ್ಣಯವನ್ನು ಕಾರ್ಯಗತಗೊಳಿಸಲು ಬದ್ಧರಾಗಿರತಕ್ಕದ್ದಲ್ಲ;

(ii) ಪ್ರಾಧಿಕಾರದ ಸಭೆಗಳ ನಡವಳಿಕೆಗಳ ಅಥವಾ ವ್ಯವಹರಣೆಗಳ ಒಂದು ಪ್ರತಿಯನ್ನು ಮತ್ತು ಸರ್ಕಾರವು ಕಾಲಕಾಲಕ್ಕೆ ಕೇಳಬಹುದಾದ ಯಾವುದೇ ವಿವರಪಟ್ಟಿಕೆಯನ್ನು ಅಥವಾ ಇತರ ಮಾಹಿತಿಯನ್ನು ಸರ್ಕಾರಕ್ಕೆ ಒದಗಿಸುವುದು;

(iii) ಸರ್ಕಾರವು ನಿರ್ದೇಶಿಸಬಹುದಾದಂಥ ಯೋಜನೆಗಳು ಮತ್ತು ಕಾಮಗಾರಿಗಳನ್ನು ಕಾರ್ಯರೂಪಕ್ಕೆ ತರುವುದು ಮತ್ತು ಅನುಷ್ಠಾನಗೊಳಿಸುವುದು ಮತ್ತು ಅದರ ಅವಶ್ಯಕ ವೆಚ್ಚಗಳನ್ನು ಭರಿಸುವುದು;

(iv) ಕಾರ್ಯನಿರ್ವಾಹಕ ಆಡಳಿತದ ವಿಷಯಗಳಲ್ಲಿ ಪ್ರಾಧಿಕಾರ ಭದ್ರತಾ ದಳವನ್ನು ಹೊರತುಪಡಿಸಿ, ಪ್ರಾಧಿಕಾರದ ಎಲ್ಲ ಅಧಿಕಾರಿಗಳು ಮತ್ತು ಉದ್ಯೋಗಿಗಳ ಮೇಲೆ ಮೇಲ್ವಿಚಾರಣೆ ನಡೆಸುವುದು ಮತ್ತು ನಿಯಂತ್ರಣ ಸಾಧಿಸುವುದು ಮತ್ತು ಅಂಥ ಅಧಿಕಾರಿಗಳ ಮತ್ತು ನೌಕರರ ಸೇವೆಗಳು ಮತ್ತು ಅವರ ವೇತನ, ವಿಶೇಷಾಧಿಕಾರಗಳು ಮತ್ತು ಭತ್ಯೆಗಳಿಗೆ ಸಂಬಂಧಿಸಿದ ಎಲ್ಲ ಪ್ರಶ್ನೆಗಳನ್ನು ಪರಿಹರಿಸುವುದು;

(v) ಪ್ರಾಧಿಕಾರದ ಪತ್ರವ್ಯವಹಾರಗಳನ್ನು ನಡೆಸುವುದು ಮತ್ತು ನಿರ್ವಹಿಸುವುದು;

(vi) ಪ್ರಾಧಿಕಾರದ ಎಲ್ಲ ಅನುಮತಿಗಳು, ಆದೇಶಗಳು, ತೀರ್ಮಾನಗಳು, ನೋಟೀಸುಗಳು ಮತ್ತು ಇತರ ದಸ್ತಾವೇಜುಗಳಿಗೆ ಮತ್ತು ಪ್ರಾಧಿಕಾರದ ಆದೇಶಗಳಿಗೆ ತನ್ನ ಸಹಿ ಹಾಕುವ ಮೂಲಕ ಅಧಿಪ್ರಮಾಣೀಕರಿಸುವುದು;

(vii) ಪ್ರಾಧಿಕಾರದ ಲೆಕ್ಕಪತ್ರಗಳು ಮತ್ತು ದಾಖಲೆಗಳ ಮೇಲ್ವಿಚಾರಣೆ ಮಾಡುವುದು ಮತ್ತು ಅವುಗಳ ಮೇಲೆ ನಿಯಂತ್ರಣ ಹೊಂದಿರುವುದು.

**ಅಧ್ಯಾಯ –V**

**ಯೋಜನಾ ಅಧಿಕಾರಿಯ ಕರ್ತವ್ಯಗಳು**

**15.** **ಯೋಜನಾ ಅಧಿಕಾರಿಯ ಕರ್ತವ್ಯಗಳು.–** 9ನೇ ಪ್ರಕರಣದ (2)ನೇ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗನುಸಾರವಾಗಿ ಯೋಜನಾ ಅಧಿಕಾರಿಯ ಕರ್ತವ್ಯಗಳು ಈ ಮುಂದಿನಂತಿರತಕ್ಕದ್ದು,–

(i) ಪರಂಪರೆ ಪ್ರದೇಶದ ಅಭಿವೃದ್ಧಿ ಯೋಜನೆಯನ್ನು ಮತ್ತು ಸ್ಥಳ ನಿರ್ವಹಣಾ ಯೋಜನೆಯನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಪ್ರಾಧಿಕಾರಕ್ಕೆ ನೆರವಾಗುವುದು;

(ii) ಪರಂಪರೆ ಪ್ರದೇಶ ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಗೊಳಿಸಲು ಅವಶ್ಯವಾಗಬಹುದಾದ ಕಾರ್ಯಯೋಜನೆಗಳನ್ನು ರೂಪಿಸಲು ಪ್ರಾಧಿಕಾರಕ್ಕೆ ನೆರವಾಗುವುದು;

(iii) ಪ್ರಾಧಿಕಾರವು ಮತ್ತು ಸರ್ಕಾರವು ಅನುಮೋದಿಸಿದ ಸದರಿ ಯೋಜನೆಗೆ ಮತ್ತು ಕಾರ್ಯಯೋಜನೆಗಳಿಗೆ ಅನುಸಾರವಾಗಿ ಅಭಿವೃದ್ಧಿ ಯೋಜನೆಯನ್ನು, ,ಇತರ ಯೋಜನಾ ಕಾರ್ಯಯೋಜನೆಗಳನ್ನು ಮತ್ತು ಪರಂಪರೆ ಪ್ರದೇಶದ ಅಭಿವೃದ್ಧಿಯನ್ನು ಕಾರ್ಯಗತಗೊಳಿಸುವುದನ್ನು ಸುನಿಶ್ಚಿತಪಡಿಸಿಕೊಳ್ಳುವಲ್ಲಿ ಮತ್ತು ಸಮನ್ವಯಗೊಳಿಸುವಲ್ಲಿ ಪ್ರಾಧಿಕಾರಕ್ಕೆ ನೆರವಾಗುವುದು;

(iv) ಯೋಜನೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಾಧಿಕಾರವು ವಹಿಸಿಕೊಡಬಹುದಾದಂಥ ಇತರ ಕೆಲಸಗಳನ್ನು ಮತ್ತು ಕಾರ್ಯಗಳನ್ನು ಮಾಡುವುದು.

**ಅಧ್ಯಾಯ -VI**

**ಲೆಕ್ಕಪತ್ರಾಧಿಕಾರಿಯ ಕರ್ತವ್ಯಗಳು**

**16.** **ಲೆಕ್ಕಪತ್ರಾಧಿಕಾರಿಯ ಕರ್ತವ್ಯಗಳು.–** ಈ ಮುಂದಿನವು ಪ್ರಾಧಿಕಾರದ ಲೆಕ್ಕಪತ್ರಾಧಿಕಾರಿಯ ಕರ್ತವ್ಯವಾಗಿರತಕ್ಕದ್ದು,–

(i) ಪ್ರಾಧಿಕಾರದ ಲೆಕ್ಕಪತ್ರಗಳನ್ನು ನಿರ್ವಹಿಸುವುದು;

(ii) ಆಯುಕ್ತರಿಗೆ ಸಲ್ಲಿಸುವುದಕ್ಕಾಗಿ ಲೆಕ್ಕಪತ್ರಗಳ ವಾರ್ಷಿಕ ವಿವರ ಪತ್ರವನ್ನು ಮತ್ತು ಜಮಾ–ಖರ್ಚು ಪಟ್ಟಿಯನ್ನು ಸಿದ್ಧಪಡಿಸುವುದು;

(iii) ಪ್ರಾಧಿಕಾರದ ಲೆಕ್ಕಪತ್ರಗಳನ್ನು ನಿರ್ವಹಿಸುವುದಕ್ಕೆ ಮತ್ತು ಆಯವ್ಯಯ ಪತ್ರವನ್ನು ಸಿದ್ಧಪಡಿಸುವುದಕ್ಕೆ ಸಂಬಂಧಿಸಿದಂತೆ ಆಯುಕ್ತರು ವಹಿಸಿಕೊಡಬಹುದಾದಂಥ ಹಣಕಾಸಿಗೆ ಸಂಬಂಧಪಟ್ಟ ಇತರ ಕರ್ತವ್ಯಗಳನ್ನು ನೆರವೇರಿಸುವುದು.

## ಅಧ್ಯಾಯ –VII

## ಪ್ರಾಧಿಕಾರದ ಇತರ ಪ್ರಕಾರ್ಯಗಳು

17. **ಪ್ರಾಧಿಕಾರದ ಇತರ ಪ್ರಕಾರ್ಯಗಳು.–** ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಪ್ರಾಧಿಕಾರವು ಈ ಮುಂದಿನ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು, ಎಂದರೆ:–

(1) ಪ್ರಾಧಿಕಾರವು, ಎಲ್ಲ ಪುರಾತತ್ವ ಸ್ಥಳಗಳು ಮತ್ತು ಸ್ಮಾರಕಗಳು, ಪ್ರಾಚೀನ ವಸ್ತುಗಳು ಮತ್ತು ಕುಶಲ ನಿರ್ಮಿತಿಗಳು, ಬಂಡೆಗಳು ಮತ್ತು ಜಲ ನಿಕಾಯಗಳು, ವನ್ಯಜೀವಿ, ಸಸ್ಯಸಂಕುಲ ಮತ್ತು ಪರಂಪರೆ ಪ್ರದೇಶದೊಳಗಿನ ಇತರ ಪರಿಸರದ ಸಮಗ್ರ ನಿರ್ವಹಣೆಗಾಗಿ ಉಪಬಂಧಕಲ್ಪಿಸುವ ಎಲ್ಲ ಸಂಗತಿಗಳನ್ನು ಪರಿಗಣನೆಗೆ ತೆಗೆದುಕೊಂಡ ನಂತರ ಸ್ಥಳ ನಿರ್ವಹಣಾ ಯೋಜನೆಯನ್ನು ಅಥವಾ ಪರಂಪರೆ ಪ್ರದೇಶದ ಸಂರಕ್ಷಣೆಯ ಮಹಾ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು; ಮತ್ತು ಹಾಗೆ ಸಿದ್ಧಪಡಿಸಿದ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕಾಗಿ ಹಾಗೂ ಕಾಲದಿಂದ ಕಾಲಕ್ಕೆ ಅದರ ಪ್ರಗತಿಯನ್ನು ಮೇಲ್ವಿಚಾರಣೆ ಮಾಡುವುದಕ್ಕಾಗಿ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು ಹಾಗೂ ಅದರ ರೀತಿ ಮತ್ತು ಪ್ರಕ್ರಿಯಗಳ ಸ್ಥೂಲ ರೂಪರೇಷೆಗಳನ್ನು ಸಿದ್ಧಪಡಿಸತಕ್ಕದ್ದು;

(2) ಪ್ರಾಧಿಕಾರವು ಆ ಇಡೀ ಭೂವಿಸ್ತಾರವನ್ನು ಆ ಸ್ಥಳದ ಎಲ್ಲಾ ನೈಸರ್ಗಿಕ, ಪುರಾತತ್ವ ಮತ್ತು ಸಾಂಸ್ಕೃತಿಕ ಸಂಪನ್ಮೂಲಗಳು ಹಾಗೂ ಇನ್ನಿತರ ಪರಿಸರಗಳೊಂದಿಗೆ ಅದರ ನಿಸರ್ಗದತ್ತ ಸೌಂದರ್ಯವನ್ನು ಪುರಾತತ್ವ ಗಣನಾಂಶಗಳ ವ್ಯಾಪ್ತಿಯೊಳಗೆ ಹೆಚ್ಚಿಸುವ ಹಾಗೂ ಕಾಪಾಡಿಕೊಂಡು ಬರುವ ಉದ್ದೇಶದಿಂದ ಸಂರಕ್ಷಿಸುವುದಕ್ಕಾಗಿ ಕ್ರಮಗಳನ್ನು ಕೈಗೊಳ್ಳತಕ್ಕದ್ದು;

(3) ಪ್ರಾಧಿಕಾರವು ಪರಂಪರಾ ಪ್ರದೇಶವನ್ನು ನೋಡಲು ಬರುವವರು ಹಾಗೂ ಪ್ರವಾಸಿಗರಿಗೆ ಅಗತ್ಯವಾದ ಮೂಲಭೂತ ಅವಶ್ಯಕತೆಗಳನ್ನು ಒದಗಿಸಿ ಸಾಕಷ್ಟು ಸೌಕರ್ಯಗಳನ್ನು ಕಲ್ಪಿಸುವ ಮೂಲಕ ಪ್ರವಾಸೋದ್ಯಮವನ್ನು ಪೋಷಿಸುವ ದೃಷ್ಟಿಯಿಂದ ಹಾಗೆಯೇ ಪುರಾತತ್ವ ಗಣನಾಂಶಗಳ ಬಗ್ಗೆ ಗಮನ ನೀಡಿ ಆ ಪರಂಪರೆಯ ಪ್ರದೇಶದಲ್ಲಿರುವ ಸ್ಥಳೀಯರಿಗೆ ಅವರ ಮೂಲಭೂತ ನಾಗರಿಕ ಸೌಕರ್ಯಗಳನ್ನು ಒದಗಿಸಿ ಅವರ ಸಮಂಜಸ ಅಗತ್ಯತೆಗಳನ್ನು ಪೂರೈಸುವ ಮೂಲಕ ಅವರ ಕ್ಷೇಮಾಭಿವೃದ್ಧಿ ಮಾಡುವ ದೃಷ್ಟಿಯಿಂದ ಆ ಪರಂಪರಾ ಪ್ರದೇಶದ ಭೂವಿಸ್ತಾರದ ಅಭಿವೃದ್ಧಿಯನ್ನು ಮಾಡಿಸತಕ್ಕದ್ದು;

(4) ಭಾರತ ಪುರಾತತ್ವ ಸರ್ವೇಕ್ಷಣಾ ಇಲಾಖೆ ಹಾಗೂ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆಯು ತಮ್ಮ ತಮ್ಮ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ನಡೆಸುವ ಚುಟುವಟಿಕೆಗಳಿಗೆ ಹಾಗೂ ಪುರಾತತ್ವ ಸ್ಥಳದ ನಿರ್ವಹಣೆ ಮತ್ತು ಕಾಪಾಡಿಕೊಂಡು ಬರುವ ಕೆಲಸಗಳಿಗೆ ಪ್ರಾಧಿಕಾರವು ಸಮನ್ವಯ ಸಹಕಾರವನ್ನು ನೀಡತಕ್ಕದ್ದು.

## ಅಧ್ಯಾಯ –VIII

## ವಾರ್ಷಿಕ ಆಯವ್ಯಯ

18. **ಪ್ರಾಧಿಕಾರದ ಆಯುಕ್ತರು ವಾರ್ಷಿಕ ಆಯವ್ಯಯವನ್ನು ಸಿದ್ಧಪಡಿಸುವುದು.–** ಪ್ರಾಧಿಕಾರದ ಆಯುಕ್ತರು ಪ್ರತಿವರ್ಷದ ಡಿಸೆಂಬರ್ ತಿಂಗಳಿನಲ್ಲಿ, ಸರ್ಕಾರವು ಅಗತ್ಯಪಡಿಸುವಂಥ ನಮೂನೆಯಲ್ಲಿ ಇತರ ವಿವರಗಳೊಂದಿಗೆ ಮುಂದಿನ ಮಾರ್ಚ್ ತಿಂಗಳಿನ 31ನೇ ದಿನಾಂಕದಂದು ಕೊನೆಗೊಳ್ಳುವ ಹಣಕಾಸು ವರ್ಷಕ್ಕಾಗಿ ವಾಸ್ತವಿಕ ಮತ್ತು ನಿರೀಕ್ಷಿತ ಸ್ವೀಕೃತಿಗಳ ಮತ್ತು ವೆಚ್ಚಗಳ ಪೂರ್ಣ ಲೆಕ್ಕದೊಂದಿಗೆ ಮುಂದಿನ ಏಪ್ರಿಲ್ ಮೊದಲ ದಿನದಂದು ಪ್ರಾರಂಭವಾಗುವ ಮುಂಬರುವ ಹಣಕಾಸು ವರ್ಷಕ್ಕಾಗಿ ಪ್ರಾಧಿಕಾರದ ಆದಾಯ ಮತ್ತು ವೆಚ್ಚವನ್ನು ತೋರಿಸುವ ಸವಿವರ ಅಂದಾಜುಗಳನ್ನು ಒಳಗೊಂಡ ಒಂದು ಆಯವ್ಯಯ ಪತ್ರವನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

19. **ವಾರ್ಷಿಕ ಆಯವ್ಯಯ ವ್ಯವಹರಣೆಗಳು.–** (1) ಪ್ರಾಧಿಕಾರವು, ಮುಂದಿನ ವರ್ಷಕ್ಕಾಗಿ ಏಪ್ರಿಲ್ ಮೊದಲ ದಿನದಂದು ಪ್ರಾರಂಭವಾಗುವ ವರ್ಷದ ಆಯವ್ಯಯದಲ್ಲಿ ಒಳಗೊಂಡಿರುವ ವಿನಿಯೋಜನೆಗಳ ಮತ್ತು ಅರ್ಥೋಪಾಯಗಳ ಮೇಲೆ ತೀರ್ಮಾನ ಕೈಗೊಳ್ಳತಕ್ಕದ್ದು. ಪ್ರಾಧಿಕಾರವು ಅನುಮೋದಿಸಿದ ಆಯವ್ಯಯ ಪತ್ರದ ಮೂರು ಪ್ರತಿಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2) ಅಂಥ ಆಯವ್ಯಯ ಅಂದಾಜಿನಲ್ಲಿ, ಪ್ರಾಧಿಕಾರವು, ಇತರ ವಿಷಯಗಳ ಜೊತೆಗೆ,–

(ಎ) ಅಧಿನಿಯಮದ ಮತ್ತು ಈ ನಿಯಮಗಳ ಮೂಲಕ ಪ್ರಾಧಿಕಾರಕ್ಕೆ ವಹಿಸಿದ ಹಲವು ಕರ್ತವ್ಯಗಳನ್ನು ನೆರವೇರಿಸಲು ಅಗತ್ಯವಾಗಬಹುದಾದಂಥ ಸೇವೆಗಾಗಿ ಸಾಕಷ್ಟು ಮತ್ತು ಸೂಕ್ತ ಉಪಬಂಧಗಳನ್ನು ಕಲ್ಪಿಸತಕ್ಕದ್ದು;

(ಬಿ) ಪ್ರಾಧಿಕಾರವು ಒಪ್ಪಂದ ಮಾಡಿಕೊಂಡು ತಾನು ತೆಗೆದುಕೊಂಡ ಸಾಲಗಳ ಸಂಬಂಧದಲ್ಲಿ ಯಾವ ಅಸಲು ಮತ್ತು ಬಡ್ಡಿಯನ್ನು ಸಂದಾಯ ಮಾಡಲು ಹೋಣೆಯಾಗಿರುವುದೋ ಆ ಎಲ್ಲ ಕಂತುಗಳನ್ನು ಗಡುವಿನ ದಿನಾಂಕದಂದು ಸಂದಾಯ ಮಾಡಲು ಉಪಬಂಧ ಕಲ್ಪಿಸತಕ್ಕದ್ದು;

(ಸಿ) ಸರ್ಕಾರಕ್ಕೆ ಮತ್ತು ಇತರೆ ಸರ್ಕಾರಿ ಏಜನ್ಸಿಗಳಿಗೆ ಸಂದಾಯ ಮಾಡಬೇಕಾದ ಎಲ್ಲ ಮೊತ್ತಗಳನ್ನು ಸಂದಾಯಮಾಡಲು ಉಪಬಂಧ ಕಲ್ಪಿಸತಕ್ಕದ್ದು;

(ಡಿ) ಮೂರು ತಿಂಗಳುಗಳ ಅವಧಿಯ ಸಿಬ್ಬಂದಿ ವೆಚ್ಚವನ್ನು ಭರಿಸಲು ಬೇಕಾಗಬಹುದಾದ ಮೊತ್ತಕ್ಕಿಂತ ಕಡಿಮೆ ಇಲ್ಲದಷ್ಟು ಮೊತ್ತವನ್ನು ಸದರಿ ವರ್ಷದ ಕೊನೆಯಲ್ಲಿ ಬಾಕಿ ಉಳಿಸಿಕೊಳ್ಳಲು ಅವಕಾಶ ನೀಡತಕ್ಕದ್ದು.

**ಅಧ್ಯಾಯ –IX**

**ವಾರ್ಷಿಕ ವರದಿ**

**20.** **ಪ್ರಾಧಿಕಾರದ ವಾರ್ಷಿಕ ವರದಿ.–** (1) ಪ್ರಾಧಿಕಾರವು, ಪ್ರತಿಯೊಂದು ಹಣಕಾಸು ವರ್ಷದ ತನ್ನ ವಾರ್ಷಿಕ ವರದಿಯನ್ನು, ತರುವಾಯದ ವರ್ಷದ ಜೂನ್ 30ನೇ ದಿನಾಂಕಕ್ಕೆ ಮುಂಚೆ, ನಮೂನೆ–Iರಲ್ಲಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(2) ವರದಿಯು, ಹಣಕಾಸು ವರ್ಷದ ಅವಧಿಯಲ್ಲಿನ ಪ್ರಾಧಿಕಾರದ ಕಾರ್ಯಚಟುವಟಿಕೆಗಳನ್ನು, ಹಣಕಾಸು ಪರಿಸ್ಥಿತಿಯನ್ನು, ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದ ವಿವರಗಳನ್ನು, ರಾಜ್ಯ ಸರ್ಕಾರವು ಉಲ್ಲೇಖಿಸಿದ ವಿಷಯಗಳ ಮೇಲೆ ತೆಗೆದುಕೊಂಡ ಕ್ರಮವನ್ನು ಒಳಗೊಂಡಿರತಕ್ಕದ್ದು.

(3) ವರದಿಯು, ರಾಜ್ಯಮಟ್ಟದ ಸಲಹಾ ಸಮಿತಿಯ ವ್ಯವಹರಣೆಗಳ ಸಾರಾಂಶವನ್ನು ಸಹ ಒಳಗೊಂಡಿರತಕ್ಕದ್ದು.

**ಅಧ್ಯಾಯ –X**

**ಸಾಲಗಳು**

**21.** **ಸಾಲ ಪಡೆಯಲು ಪ್ರಾಧಿಕಾರದ ಅಧಿಕಾರ.–** (1) ಪ್ರಾಧಿಕಾರವು ತನ್ನ ಸಭೆಯಲ್ಲಿ ಅಂಗೀಕರಿಸಿದ ನಿರ್ಣಯಗಳಿಗೆ ಅನುಸಾರವಾಗಿ,–

(ಎ) ನಿರ್ಮಾಣ ಕಾಮಗಾರಿಗಳಿಗಾಗಿ,

(ಬಿ) ಭೂಮಿಗಳು ಮತ್ತು ಕಟ್ಟಡಗಳನ್ನು ಅರ್ಜಿಸುವುದಕ್ಕಾಗಿ, ಅಥವಾ

(ಸಿ) ಸರ್ಕಾರಕ್ಕೆ ಕೊಡಬೇಕಾದ ಯಾವುದೇ ಸಾಲವನ್ನು ಸಂದಾಯ ಮಾಡಲು, ಅಥವಾ

(ಡಿ) ಅಧಿನಿಯಮದ ಅಥವಾ ಈ ಹಿಂದೆ ಜಾರಿಯಲ್ಲಿದ್ದ ಯಾವುದೇ ಇತರ ಕಾನೂನಿನ ಅಡಿಯಲ್ಲಿ ಎತ್ತಿದ ಸಾಲವನ್ನು ಮರುಪಾವತಿ ಮಾಡಲು:

ಎಲ್ಲ ಅಥವಾ ಈ ಅಧಿನಿಯಮದ ಮೂಲಕ ಅಥವಾ ಮೇರೆಗೆ ಅಧಿಕೃತಗೊಳಿಸಲಾದ ಯಾವುದೇ ಶುಲ್ಕಗಳ ಮತ್ತು ಬಾಕಿಗಳ ಭದ್ರತೆಗಳ ಮೇಲೆ ಸಾಲ, ಡಿಬೆಂಚರು ಅಥವಾ ಇತರ ರೂಪದಲ್ಲಿ ಅವಶ್ಯವಾಗಬಹುದಾದಷ್ಟು ಮೊತ್ತದ ಸಾಲವನ್ನು ಪಡೆಯಬಹುದು:

ಪರಂತು,–

(i) ಸರ್ಕಾರದ ಪೂರ್ವಮಂಜೂರಾತಿ ಇಲ್ಲದೆ ಯಾವುದೇ ಸಾಲವನ್ನು ಪಡೆಯತಕ್ಕದಲ್ಲ, ಮತ್ತು

(ii) ಸಾಲದ ಮೊತ್ತ, ಬಡ್ಡಿದರ ಮತ್ತು ಸಾಲಗಳನ್ನು ಪಡೆದ ದಿನಾಂಕ, ಮರುಪಾವತಿಯ ಕಾಲ ಮತ್ತು ವಿಧಾನ ಮತ್ತು ಇತರ ವಿಷಯಗಳೂ ಸೇರಿದಂತೆ ನಿಬಂಧನೆಗಳು ಸರ್ಕಾರದ ಅನುಮೋದನೆಗೆ ಒಳಪಟ್ಟಿರತಕ್ಕದ್ದು.

(2) (1)ನೇ ಉಪನಿಯಮದ ಅಡಿಯಲ್ಲಿ ಯಾವುದೇ ಹಣದ ಮೊತ್ತವನ್ನು ಸಾಲ ಪಡೆದಾಗ,–

(ಎ) ಸರ್ಕಾರದ ಪೂರ್ವ ಮಂಜೂರಾತಿ ಪಡೆಯದೆ, ಸಾಲದ ಮೊತ್ತದ ಯಾವುದೇ ಭಾಗವನ್ನು, ಸಾಲವನ್ನು ಯಾವ ಉದ್ದೇಶಕ್ಕಾಗಿ ಪಡೆಯಲಾಗಿದೆಯೋ ಆ ಉದ್ದೇಶಕ್ಕಲ್ಲದೆ ಇತರ ಯಾವುದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದಲ್ಲ.

(ಬಿ) (1)ನೇ ಉಪ ನಿಯಮದ (ಎ) ಖಂಡದ ಅಡಿಯಲ್ಲಿ ಪಡೆಯಲಾದ ಸಾಲದ ಮೊತ್ತದ ಯಾವುದೇ ಭಾಗವನ್ನು ಯಾವ ಕಾಮಗಾರಿಗಳ ನಿರ್ಮಾಣಕ್ಕಾಗಿ ಅಂಥ ಹಣವನ್ನು ಸಾಲಪಡೆಯಲಾಗಿದೆಯೋ ಆ ಕಾಮಗಾರಿಗಳ ನಿರ್ಮಾಣಕ್ಕಾಗಿ ವಿಶೇಷವಾಗಿ ನಿಯೋಜಿಸಿಕೊಂಡಿರುವವರನ್ನು ಹೊರತುಪಡಿಸಿ ಪ್ರಾಧಿಕಾರದ ಇತರ ಅಧಿಕಾರಿಗಳು ಅಥವಾ ನೌಕರರಿಗೆ ಸಂಬಳ ಅಥವಾ ಭತ್ಯೆಗಳನ್ನು ಸಂದಾಯಮಾಡಲು ವಿನಿಯೋಗಿಸತಕ್ಕದ್ದಲ್ಲ;

(ಸಿ) ಲೆಕ್ಕಪತ್ರಗಳಲ್ಲಿನ ಪ್ರತಿಯೊಂದು ತಿದ್ದುಪಾಟು ಅಥವಾ ಬದಲಾವಣೆಯನ್ನು ಕೆಂಪುಶಾಯಿನಲ್ಲಿ (ಮೂಲ ನಮೂದನೆಯಲ್ಲಿ ಒಂದು ಗೆರೆಯನ್ನು ಎಳೆಯುವ ಮೂಲಕ) ಸ್ಪಷ್ಟವಾಗಿ ಮಾಡಬೇಕು ಮತ್ತು ಅದನ್ನು ಸರಿಪಡಿಸಬೇಕು ಮತ್ತು ಅದಕ್ಕೆ ಲೆಕ್ಕಪತ್ರಾಧಿಕಾರಿಯವರು ಚಿಕ್ಕರುಜು ಹಾಕಿ ದೃಢೀಕರಿಸಿರಬೇಕು. ಪುಸ್ತಕಗಳು ಮತ್ತು ವೋಚರುಗಳಲ್ಲಿ

